

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 1224 |
| ಸದಸ್ಯರ ಹೆಸರು | ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 16.03.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಿರು ಖನಿಜಗಳ ಗಣಿಗಾರಿಕೆಯಿಂದ 2015-16ನೇ ಸಾಲಿನಿಂದ ಇಲ್ಲಿಯವರೆಗೆ ಸಂಗ್ರಹವಾಗಿರುವ ಅಭಿವೃದ್ಧಿ ನಿಧಿಯ ಹಣ ಎಷ್ಟು; (ವಿವರ ನೀಡುವುದು) | ರಾಜ್ಯದಲ್ಲಿ ಮುಖ್ಯ ಖನಿಜ (ಗಣಿ) ಮತ್ತು ಉಪ ಖನಿಜ (ಕಲ್ಲು) ಗಣಿಗಾರಿಕೆಯಿಂದ ಸಂಗ್ರಹಿಸುವ ರಾಜಧನದ ಮೇಲೆ ಶೇ. 30 ಮತ್ತು ಶೇ.10 ರ ಅನುಗುಣವಾಗಿ ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ (ಡಿಎಂಎಫ್) ಮೊತ್ತವನ್ನು ಗುತ್ತಿಗೆದಾರರಿಂದ ಸಂಗ್ರಹಿಸಲಾಗುತ್ತದೆ.<br>ಸದರಿ ಮೊತ್ತವನ್ನು ಗಣಿ ಬಾಧಿತ ಪ್ರದೇಶ ಹಾಗೂ ಜನರ ಅಭಿವೃದ್ಧಿಗಾಗಿ ಬಳಸಲಾಗುತ್ತದೆ.<br>2015-16 ನೇ ಸಾಲಿನಿಂದ ಜನವರಿ 2021 ರ ಅಂತ್ಯದವರೆಗೆ ರೂ.2336.13 ಕೋಟಿಗಳನ್ನು ಸಂಗ್ರಹಿಸಲಾಗಿದೆ.<br>**ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.** |
| ಆ) | ಇದರಲ್ಲಿ ಖರ್ಚಾಗದೆ (ಅಭಿವೃದ್ಧಿ ಕಾರ್ಯಗಳಿಗೆ) ಉಳಿದಿರುವ ಹಣ ಎಷ್ಟು; (ವಿವರ ನೀಡುವುದು) | 2015-16ನೇ ಸಾಲಿನಿಂದ ಜನವರಿ 2021ರ ಅಂತ್ಯದವರೆಗೆ ರೂ.2336.13 ಕೋಟಿಗಳನ್ನು ಸಂಗ್ರಹಿಸಿದ್ದು, ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ನಿಂದ ರೂ. 3635.78 ಕೋಟಿಗಳಿಗೆ ಕ್ರಿಯಾ ಯೋಜನೆಯನ್ನು ಅನುಮೋದಿಸಿ, ರೂ.798.16 ಕೋಟಿಗಳ ಮೊತ್ತವನ್ನು ಪ್ರಧಾನಮಂತ್ರಿ ಖನಿಜ ಕ್ಷೇತ್ರ ಕಲ್ಯಾಣ ಯೋಜನೆ (ಪಿಎಂಕೆಕೆಕೆವೈ) ಗಳಿಗೆ ಖರ್ಚು ಮಾಡಲಾಗಿದ್ದು, ರೂ. 1537.97 ಕೋಟಿಗಳು ಉಳಿದಿರುತ್ತದೆ.<br>**ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.** |
| ಇ) | ಗಣಿ ಜಿಲ್ಲೆಗಳ ಅಭಿವೃದ್ಧಿ, ಮರು ನಿರ್ಮಾಣ ಹಾಗೂ ಪುನರ್ವಸತಿಗಾಗಿ ಸಂಗ್ರಹಿಸಿರುವ ಹಣ ಸರಿಯಾಗಿ ಬಳಕೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗಣಿ ಬಾಧಿತ ಜಿಲ್ಲೆಗಳ ಅಭಿವೃದ್ಧಿ, ಮರು ನಿರ್ಮಾಣ ಹಾಗೂ ಪುನರ್ವಸತಿಗಾಗಿ ಸಂಗ್ರಹಿಸಿರುವ ಡಿಎಂಎಫ್ ವಂತಿಗೆಯನ್ನು ಪ್ರಧಾನ ಮಂತ್ರಿ ಖನಿಜ ಕ್ಷೇತ್ರ ಕಲ್ಯಾಣ ಯೋಜನೆ (ಪಿಎಂಕೆಕೆಕೆವೈ) ಮಾರ್ಗಸೂಚಿಯಂತೆ ಹಾಗೂ ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ನಿಯಮಗಳು, 2016ರಂತೆ ಬಳಕೆ ಮಾಡಲಾಗುತ್ತಿದೆ. |

| | | |
|---|---|---|
| ಈ) | ಆಯಾ ಜಿಲ್ಲಾ ವ್ಯಾಪ್ತಿಯ ಶಾಸಕರ ಸಲಹೆಗಳನ್ನು ಪಡೆದು ಕ್ರಿಯಾಯೋಜನೆ ತಯಾರಿಸಿ ಈ ನಿಧಿಯನ್ನು ಸಮರ್ಪಕವಾಗಿ ಬಳಸಿಕೊಳ್ಳಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ನಿಯಮಗಳು, 2016ರ ನಿಯಮ 5 ರಂತೆ, ಪ್ರತಿ ಜಿಲ್ಲೆಯಲ್ಲಿ ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್‌ನ್ನು ರಚಿಸಿದ್ದು, ಇದಕ್ಕೆ ಜಿಲ್ಲಾ ಉಸ್ತುವಾರಿ ಸಚಿವರು ಅಧ್ಯಕ್ಷರಾಗಿರುತ್ತಾರೆ. ಸದರಿ ಟ್ರಸ್ಟಿನಲ್ಲಿ ಒಟ್ಟು 18 ಟ್ರಸ್ಟಿಗಳಿದ್ದು, ಇದರಲ್ಲಿ ಲೋಕಸಭಾ ಸದಸ್ಯರು, ವಿಧಾನ ಸಭಾ ಸದಸ್ಯರು, ವಿಧಾನ ಪರಿಷತ್ತಿನ (ಜಿಲ್ಲೆಯ ನೊಂದಾಯಿತ ಮತದಾರ) ಸದಸ್ಯರು, ಜಿಲ್ಲಾಧಿಕಾರಿಗಳು, ಸಂಬಂಧಪಟ್ಟ ಇಲಾಖೆಯ ಅಧಿಕಾರಿಗಳು ಟ್ರಸ್ಟಿಗಳಾಗಿದ್ದು, ಜಿಲ್ಲೆಯಲ್ಲಿ ಗಣಿಗಾರಿಕೆಯಿಂದ ಬಾಧಿತವಾದ ಪ್ರದೇಶಗಳನ್ನು ಅಭಿವೃದ್ಧಿಪಡಿಸಲು ಕೈಗೊಳ್ಳಬೇಕಾದ ಯೋಜನೆಗಳನ್ನು ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ಸಭೆಯಲ್ಲಿ ಅನುಮೋದನೆಗೊಂಡ ನಂತರ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತದೆ.<br><br>ಜಿಲ್ಲಾವಾರು ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್‌ನಲ್ಲಿ ಅನುಮೋದಿಸಿದ ಕ್ರಿಯಾಯೋಜನೆ ಮೊತ್ತದ **ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.**<br><br>ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ನಿಂದ ಅನುಮೋದಿತ ಕ್ರಿಯಾಯೋಜನೆ ಹಾಗೂ ಕಾಮಗಾರಿಗಳ ಪ್ರಗತಿ ಪರಿಶೀಲನೆಯನ್ನು ಮಾನ್ಯ ಮುಖ್ಯಮಂತ್ರಿರವರ ಅಧ್ಯಕ್ಷತೆಯಲ್ಲಿ ನಡೆಸುತ್ತಿದ್ದ ಜಿಲ್ಲಾಧಿಕಾರಿ / ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ (DC / CEO) ಸಭೆಯಲ್ಲಿ ಕೈಗೊಳ್ಳಲಾಗುತ್ತಿದೆ ಹಾಗೂ ಮುಖ್ಯ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ಜಿಲ್ಲೆಯ ಜಿಲ್ಲಾಧಿಕಾರಿಗಳೊಂದಿಗೆ ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ಮಾಸಿಕ ಪ್ರಗತಿ ಪರಿಶೀಲನೆ ಸಭೆ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ ಸಿಐ 169 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)
ಗಣಿ ಮತ್ತು ಭೂವಿಜ್ಞಾನ ಸಚಿವರು.

ಅನುಬಂಧ

ಜಿಲ್ಲಾ ಖನಿಜ ಪ್ರತಿಷ್ಠಾನ (ಡಿಎಂಎಫ್)ಟ್ರಸ್ಟ್ ಅಡಿ ಸಂಗ್ರಹಿಸಿದ ಮೊತ್ತ, ಅನುಮೋದಿಸಿದ ಕ್ರಿಯಾಯೋಜನೆ ಮೊತ್ತ, ಖರ್ಚಾದ ಹಾಗೂ ಉಳಿದಿರುವ ಮೊತ್ತದ ವಿವರ

ರೂ.ಲಕ್ಷಗಳಲ್ಲಿ

| ಕ್ರ.ಸಂ | ಜಿಲ್ಲೆ | 2015-16ರಿಂದ ಜನವರಿ 2021 ರವರೆಗೆ ಸಂಗ್ರಹಿಸಿದ ಡಿಎಂಎಫ್ ಮೊತ್ತ | ಅನುಮೋದಿತ ಕ್ರಿಯಾಯೋಜನೆ ಮೊತ್ತ | ಖರ್ಚಾದ ಮೊತ್ತ | ಉಳಿದ ಮೊತ್ತ |
|---|---|---|---|---|---|
| ಅ | ಆ | ಇ | ಈ | ಉ | ಊ( ಇ-ಉ) |
| 1 | Ballari | 136487.70 | 222215.51 | 40442.80 | 96044.90 |
| 2 | Kalaburagi | 33104.40 | 54084.42 | 6054.37 | 27050.03 |
| 3 | Chitradurga | 20211.65 | 30639.65 | 5210.15 | 15001.50 |
| 4 | Bagalkot | 6969.68 | 11410.19 | 2650.95 | 4318.73 |
| 5 | Koppal | 4850.41 | 8512.12 | 3240.92 | 1609.49 |
| 6 | Raichur | 3962.56 | 7023.41 | 1960.01 | 2002.55 |
| 7 | Chikkaballapur | 3402.98 | 6672.24 | 873.73 | 2529.25 |
| 8 | Ramanagara | 3273.30 | 2750.56 | 1472.29 | 1801.01 |
| 9 | Bangalore Urban | 3119.07 | 6354.13 | 839.61 | 2279.46 |
| 10 | Tumakuru | 2782.63 | 4995.63 | 821.02 | 1961.61 |
| 11 | Bangalore Rural | 2247.59 | 144.50 | 17.70 | 2229.89 |
| 12 | Belgaum | 2180.08 | 1524.30 | 1366.96 | 813.12 |
| 13 | Chamarajanagar | 2105.17 | 1954.18 | 284.49 | 1820.69 |
| 14 | Uttara Kannada | 1142.00 | 761.63 | 663.49 | 478.51 |
| 15 | Hassan | 1092.23 | 653.63 | 519.48 | 572.75 |
| 16 | Dakshina Kannada | 857.63 | 165.50 | 126.49 | 731.15 |
| 17 | Udupi | 731.62 | 446.07 | 97.27 | 634.35 |
| 18 | Chikkamagaluru | 721.76 | 665.24 | 486.88 | 234.88 |
| 19 | Kolar | 697.63 | 161.81 | 66.19 | 631.44 |
| 20 | Gadag | 606.09 | 114.13 | 68.13 | 537.95 |
| 21 | Dharwad | 553.88 | 265.40 | 46.41 | 507.47 |
| 22 | Haveri | 538.52 | 788.01 | 127.54 | 410.98 |
| 23 | Vijayapura | 458.05 | 410.22 | 108.37 | 349.68 |
| 24 | Davanagere | 434.44 | 532.43 | 398.94 | 35.50 |
| 25 | Mandya | 392.72 | 0 | 0 | 392.72 |
| 26 | Shivamogga | 209.50 | 56.94 | 27.36 | 182.14 |
| 27 | Mysuru | 157.56 | 177.19 | 9.44 | 148.12 |
| 28 | Bidar | 115.16 | 47.77 | 0.00 | 115.16 |
| 29 | Kodagu | 106.16 | 14.50 | 0.00 | 106.16 |
| 30 | Yadgir | 100.99 | 36.97 | 14.58 | 86.41 |
| | COVID 19 Expenditure up to 31st Jan 2021 | | | 11820.81 | |
| | Grand Total | 233613.15 | 363578.27 | 79816.36 | 165617.59 |

CI 169 mmn 2021

Deputy Director (Min. Admn)
Dept. of Mines & Geology